

# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 110 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅ. ದೇವೇಗೌಡ (ಪದವಿಧರರ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 13.12.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಸರ್ಜಿಕಲ್ ಆಂಕಾಲಜಿ ವಿಭಾಗವನ್ನು ಆರ್ಥಿಕ ಇಲಾಖೆಯ ಅನುಮೋದನೆ ಪಡೆದು ಆರಂಭಿಸಲು ದಿನಾಂಕ: 22.08.2017 ರಂದು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ 24 ನೇ ಆಡಳಿತ ಪರಿಷತ್ ಸಭೆಯಲ್ಲಿ ತೀರ್ಮಾನವಾಗಿರುವುದು ನಿಜವಲ್ಲವೇ; | ಬಿಎಂಸಿಆರ್‌ಐ ನಲ್ಲಿ ದಿನಾಂಕ: 28.08.2017ರಂದು ನಡೆದ 24ನೇ ಆಡಳಿತ ಪರಿಷತ್ತಿನ ಸಭೆಯ ವಿಷಯಸೂಚಿ 19ರಲ್ಲಿ ಸಂಸ್ಥೆಯಲ್ಲಿ ಸರ್ಜಿಕಲ್ ಅಂಕಾಲಜಿ ವಿಭಾಗವನ್ನು ಹೊಸದಾಗಿ ಪ್ರಾರಂಭಿಸಲು ವಿವರವಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಅನುಮತಿ ಪಡೆಯುವಂತೆ ನಿರ್ಣಯಿಸಲಾಗಿದೆ. |
| ಆ) | ಸದರಿ ವಿಭಾಗದ ಅವಶ್ಯಕತೆ ಇದ್ದರೂ ಇಲ್ಲಿಯವರೆಗೆ ಸದರಿ ಆಂಕಾಲಜಿ ವಿಭಾಗವನ್ನು ಆರಂಭಿಸದಿರಲು ಕಾರಣವೇನು? | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಗೆ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಸರ್ಕಾರದ ಆದೇಶ ಸಂಖ್ಯೆ: ಆಕುಕ 378 ಎಂಎಂಸಿ 2017, ದಿನಾಂಕ: 16.01.2018 ರಲ್ಲಿ ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗದಲ್ಲಿರುವ 01 ಸಹಾಯಕ ಪ್ರಾಧ್ಯಾಪಕರ ಹುದ್ದೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸಹಾಯಕ ಪ್ರಾಧ್ಯಾಪಕರು, ಸರ್ಜಿಕಲ್ ಅಂಕಾಲಜಿ ಎಂದು ಮರುಪದನಾಮೀಕರಣ ಮಾಡಲಾಗಿರುತ್ತದೆ.<br><br>(1) ಮೇಲ್ಕಂಡಂತೆ ಮರುಪದನಾಮೀಕರಣ ಗೊಳಿಸಲಾಗಿರುವ ಸಹಾಯಕ ಪ್ರಾಧ್ಯಾಪಕರು, ಸರ್ಜಿಕಲ್ ಅಂಕಾಲಜಿ ವಿಭಾಗ ಈ ಹುದ್ದೆಗೆ ಶಸ್ತ್ರಚಿಕಿತ್ಸಾ ವಿಭಾಗದ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಈ ಹಿಂದೆ ಪಾವತಿಸಲಾಗುತ್ತಿದ್ದ ವೇತನ ಭತ್ಯೆಗಳನ್ನು ಮಾತ್ರ ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ, ಈ ಹುದ್ದೆಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಉಂಟಾಗತಕ್ಕದ್ದಲ್ಲ. |

| | | |
|---|---|---|
| | | (2) ಮೇಲ್ಕಂಡಂತೆ ಮರುಪದನಾಮೀಕರಣ ಗೊಳಿಸಲಾಗಿರುವ ಶಸ್ತ್ರಚಿಕಿತ್ಸಾ ವಿಭಾಗದ ಸಹಾಯಕ ಪ್ರಾಧ್ಯಾಪಕರ ಹುದ್ದೆಯನ್ನು ಮತ್ತೊಮ್ಮೆ ಸೃಜಿಸಲು ಪ್ರಸ್ತಾವನೆ ಸಲ್ಲಿಸತಕ್ಕದ್ದಲ್ಲ.<br><br>ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಶಸ್ತ್ರಚಿಕಿತ್ಸಾ ವಿಭಾಗದಡಿ ಸರ್ಜಿಕಲ್ ಅಂಕಾಲಜಿ ವಿಭಾಗವನ್ನು ಒಳಗೊಂಡಂತೆ ಹೊಸದಾಗಿ ತೆರೆಯಲು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದು, ದಿನಾಂಕ: 03.03.2021ರ ಆರ್ಥಿಕ ಇಲಾಖೆಯ ಅಭಿಪ್ರಾಯದಲ್ಲಿ "ಪ್ರಸ್ತುತ ಕಿದ್ವಾಯಿ ಸಂಸ್ಥೆಯಲ್ಲಿ Medical Oncology and Surgical Oncology ಗೆ ಸಂಬಂಧಿಸಿದ ಡಿಪಾರ್ಟ್‌ಮೆಂಟ್‌ಗಳು ಇರುವುದರಿಂದ, ಬಿಎಂಸಿಆರ್‌ಐ ಯಲ್ಲಿ 2 ಯುನಿಟ್ ಸೃಜಿಸುವ ಹಾಗೂ ಅದಕ್ಕೆ 2 ಹುದ್ದೆಗಳನ್ನು ಸೃಜಿಸುವ ಪ್ರಸ್ತಾವನೆಯನ್ನು ಕೈಬಿಡಲು ತಿಳಿಸಿದೆ. " |

ಸಂಖ್ಯೆ: ಎಂಇಡಿ 600 ಎಂಎಂಸಿ 2021

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು